ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರವರಿ, 2021

ನಿಗದಿ ಪಡಿಸಿದ ಮೊತ್ತಕ್ಕಿಂತ ಕಡಿಮೆ ಮೊತ್ತಕ್ಕೆ ನೋಂದಣಿ ಮಾಡುವ ಕುರಿತು.

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)

322 (314) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ ಎರಡು ವರ್ಷಗಳಲ್ಲಿ ಬೆಂಗಳೂರು ನಗರದಲ್ಲಿ ಆಸ್ತಿ ಖರೀದಿ ಮತ್ತು ಮಾರಾಟದ ಎಷ್ಟು ಪ್ರಕ್ರಿಯೆಗಳು ನೋಂದಣಿಯಾಗಿವೆ; ವಿಭಾಗವಾರು ಮಾಹಿತಿ ನೀಡುವುದು ಇದರಿಂದ ಸಂಗ್ರಹವಾದ ರಾಜಸ್ವ ಮೊತ್ತವೆಷ್ಟು;

(ಆ) ಕೇಂದ್ರ ಮೌಲ್ಯ ಮಾಪನ ಸಮಿತಿಯಿಂದ ನಿಗದಿ ಪಡಿಸಿದ ಮೊತ್ತಕ್ಕಿಂತ ಕಡಿಮೆ ಮೊತ್ತಕ್ಕೆ ನೋಂದಣಿ ಮಾಡಿಸಿಕೊಳ್ಳುವ ಅಧಿಕಾರ ಉಪನೋಂದಣಾಧಿಕಾರಿಗಳಿಗೆ ಇದೆಯೇ; ಬೆಳಗಾವಿ ಉಪನೋಂದಣಾಧಿಕಾರಿಯವರು 2018 ರಲ್ಲಿ ಸರ್ವೆ ಸಂ 3928,3929, 3929/1,3929/2, ಮತ್ತು 3929/5 ನ್ನು ಕಡಿಮೆ ದರಕ್ಕೆ ನೋಂದಣಿ ಮಾಡುವ ಮೂಲಕ ಸರಕಾರಕ್ಕೆ ರೂ. 9.56 ಕೋಟಿ ಮುದ್ರಾಂಕ ಶುಲ್ಕ ನಷ್ಟ ಉಂಟು ಮಾಡಿರುವುದು ಸರಕಾರದ ಗಮನಕ್ಕೆ ಬಂದಿದೆಯೇ;

(ಇ) ಸರಕಾರಕ್ಕೆ ನಷ್ಟವಾದ ರೂ.9.56 ಕೋಟಿ ಮುದ್ರಾಂಕ ಶುಲ್ಕವನ್ನು ಸಂಬಂಧಿತ ಅಧಿಕಾರಿಯಿಂದಲೇ ವಸೂಲಿ ಮಾಡಲು ಯಾವ ಕ್ರಮ ಕೈಗೊಂಡಿದೆ; ಸದರಿ ಅಧಿಕಾರಿಯನ್ನು ಅಮಾನತ್ತು ಮಾಡಲಾಗಿದೆಯೇ; ಈ ಕುರಿತು ಸರಕಾರದ ನಿಲುವೇನು?